ಷೇರನ್ನು ಡಾ॥ ಕೆ. ಜಿ. ಜಗದೀಶ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಇವರ ಹೆಸರಿಗೆ ವರ್ಗಾಯಿಸಲಾಗಿದೆ.

**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ಪಿ.ಆರ್. 366**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕುವೆಂಪು ರಸ್ತೆ, ಕೆನರಾ ಬ್ಯಾಂಕ್ ಎದುರು ಶಿವಮೊಗ್ಗ.**

**ವಿಷಯ:** ಇಂದಾದ್ ಕ್ರೆಡಿಟ್ ಕೋ–ಆಪರೇಟೀವ್ ಸೊಸೈಟಿ ನಿ., ಭದ್ರಾವತಿ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಪತ್ರ ನಂ:ಸನಿಶಿ24/ಸಮಾಪನೆ/ಸಿಆರ್29/2011–12/ದಿನಾಂಕ: 22–10–2011.
2. ಈ ಕಛೇರಿಯ ಷರತ್ತಿನ ಪತ್ರದ ಸಂ: ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್/2011–12/ ದಿನಾಂಕ: 29–10–2011.
3. ಅಧ್ಯಕ್ಷರು ಇಂದಾದ್ ಕ್ರೆಡಿಟ್ ಕೋ–ಆಪರೇಟೀವ್ ಸೊಸೈಟಿ ನಿ., ಭದ್ರಾವತಿ ಇವರ ಪತ್ರ ದಿನಾಂಕ: 09–12–2011.
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಪತ್ರ ನಂ:ಸನಿಶಿ24/ದೂ.ಅ/2010–11/ದಿನಾಂಕ: 06–03–2012.

**ಪ್ರಸ್ತಾವನೆ:–**

ನಿಷ್ಕ್ರಿಯಗೊಂಡಿರುವ, ಇಂದಾದ್ ಕ್ರೆಡಿಟ್ ಕೋ–ಆಪರೇಟೀವ್ ಸೊಸೈಟಿ ನಿ., ಭದ್ರಾವತಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಸಂಘವು ನೋಂದಣಿ ಸಂ:ಎಆರ್–24/ಎಂಕೆಟಿ/ಆರ್‌ಜಿಎನ್/15408/1987–88 ದಿನಾಂಕ 15–10–1987 ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯನ್ನು ಹೊಂದಿರುತ್ತದೆ.

ಸಂಘದ ಉಪನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತಂದು ಕಾರ್ಯ ನಿರ್ವಹಿಸುತ್ತಿರುವುದಿಲ್ಲಾ, ಸಂಘವು ಹೆಚ್ಚಿನ ನಷ್ಟವನ್ನು ಹೊಂದಿದ್ದು, ಸಂಘದ ಸುಸ್ತಿ ಸಾಲಗಳು ವಸೂಲಾತಿಯಲ್ಲಿ ಯಾವುದೇ ಪ್ರಗತಿಯಾಗಿರುವುದಿಲ್ಲಾ. ಆಡಳಿತ ಮಂಡಳಿಯವರು ತಮ್ಮ ಕರ್ತವ್ಯಗಳ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸುವಲ್ಲಿ ವಿಫಲರಾಗಿರುತ್ತಾರೆ. ಈ ಆಡಳಿತ ಮಂಡಳಿಯನ್ನು ಮುಂದುವರೆಸಿದ್ದಲ್ಲಿ ಇನ್ನೂ ಹೆಚ್ಚಿನ ನಷ್ಟವನ್ನು ಹೊಂದುತ್ತದೆ. ಈ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಈ ಕಚೇರಿಯಿಂದ ಉಲ್ಲೇಖ (2) ರ ಪತ್ರದಲ್ಲಿ ಸುಸ್ತಿ ಸಾಲಗಳ ವಸೂಲಾತಿ ಮಾಡುವುದು. ತಪ್ಪಿದಲ್ಲಿ ಕಾನೂನು ಕ್ರಮ ಕೈವಿಡುವುದು, ಷೇರು ಸಂಗ್ರಹಣೆ, ಠೇವಣಿ ಸಂಗ್ರಹಣೆಗಳ ಬಗ್ಗೆ ಷರತ್ತುಗಳನ್ನು ನೀಡಿ 3 ತಿಂಗಳ ಒಳಗೆ ಪ್ರಗತಿ ಸಾಧಿಸಲು ಕಾಲಾವಕಾಶ ನೀಡಲಾಗಿತ್ತು. ಸದರಿ ಪತ್ರವು ಕಾರ್ಯದರ್ಶಿ/ಅಧ್ಯಕ್ಷರಿಗೆ ದಿನಾಂಕ 08–12–2011 ರಂದು ಜಾರಿಯಾಗಿರುತ್ತದೆ. ಸದರಿ ಸಂಘದ ಅಧ್ಯಕ್ಷರು ದಿನಾಂಕ 09–12–2011ರ ಪತ್ರದಲ್ಲಿ ಸಂಘಕ್ಕೆ ವಿಧಿಸಿರುವ 3 ಷರತ್ತುಗಳನ್ನು ಪೂರ್ತಿ ಮಾಡಲು ಆಡಳಿತ ಮಂಡಳಿ ಬದ್ಧವಾಗಿದೆ ಎಂದು ತಿಳಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಉಲ್ಲೇಖ(4) ರ ಪತ್ರದಲ್ಲಿ ಈ ಕಚೇರಿಯಿಂದ ನೀಡಿದ ಯಾವುದೇ ಷರತ್ತುಗಳನ್ನು ಪಾಲನೆ ಮಾಡಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆಡಳಿತ ಮಂಡಳಿಯು ಷರತ್ತುಗಳನ್ನು ಪೂರೈಸಲು ವಿಫಲರಾಗಿರುತ್ತದೆ. ಈ ಆಡಳಿತ ಮಂಡಳಿ ಮುಂದುವರೆಸುವುದರಿಂದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದೆ ಇರುವುದರಿಂದ ಮತ್ತು ಸಂಘಕ್ಕೆ ಹಾನಿಯಾಗುವುದರಿಂದ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗರವರು ಉಲ್ಲೇಖ(1)ರ ಪತ್ರದಲ್ಲಿ ಸಮಾಪನೆಗೊಳಿಸಲು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–2011–12/1849 ದಿನಾಂಕ: 08–03–2012.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)ರನ್ವಯ ಮತ್ತು ಸರ್ಕಾರದ ಅಧಿಸೂಚನೆ ನಂ:ಸಿಒ 139 ಸಿಎಲ್‌ಎಂ 2010 ದಿನಾಂಕ: 17–02–2011 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಶೋಕ.ವೆಂ.ಮೊರಬ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ–ನಿಬಂಧಕರು,

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಇಂದಾದ್ ಕ್ರೆಡಿಟ್ ಕೋ–ಆಪರೇಟೀವ್ ಸೊಸೈಟಿ ನಿ., ಭದ್ರಾವತಿ ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರಂತೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಶಿವಮೊಗ್ಗ, ಇದರ ಭದ್ರಾವತಿ ಶಾಖೆಯ (ಹಾಲಪ್ಪ ವೃತ್ತ) ವ್ಯವಸ್ಥಾಪಕರನ್ನು ಸಮಾಪನೆ ಅಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು 15ದಿನಗಳ ಒಳಗೆ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 74 ಮತ್ತು ನಿಯಮಗಳು 1960 ರ ನಿಯಮ 33 ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 08–03–2012 ರಂದು ನೀಡಲಾಗಿದೆ.

**ಅಶೋಕ.ವೆಂ.ಮೊರಬ,**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಪಿ.ಆರ್. 365**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

### ಸಂಖ್ಯೆ : ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/57/2010–11, ದಿನಾಂಕ 09ನೇ ಫೆಬ್ರವರಿ 2012

**ವಿಷಯ:** ಸ್ಥಗಿತಗೊಂಡಿರುವ ದೊಡ್ಡಚೆಲ್ಲೂರು ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ. ಚಳ್ಳಕೆರೆ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ : ಸನಿ:30 : ಸಮಾಪನೆ : ಸಿಆರ್/73/10–11, ದಿನಾಂಕ 16–12–2010.
2. ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ, ದಿನಾಂಕ 22–12–2010.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ದೊಡ್ಡಚೆಲ್ಲೂರು ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ. ಚಳ್ಳಕೆರೆ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ : ಸನಿ/30/ಆರ್‌ಜಿಎನ್/35228/2005–2006, ದಿನಾಂಕ 17–02–2011ರ ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ. ಸಿಓ/201/ಸಿಎಲ್‌ಎಂ: 2010 ಬೆಂಗಳೂರು, ದಿನಾಂಕ 17–02–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ದೊಡ್ಡಚೆಲ್ಲೂರು ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ. ಚಳ್ಳಕೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಈ ಕಛೇರಿಯ ಮುದ್ರೆಯೊಂದಿಗೆ ಈ ದಿನಾಂಕ 09–02–2012 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಪಿ.ಆರ್. 363**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಛೇರಿ, ನಡವಳಿಗಳು.

**ಸಂಖ್ಯೆ : ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/57/2010-11, ದಿನಾಂಕ 09ನೇ ಫೆಬ್ರವರಿ 2012**

**ವಿಷಯ:** ಶ್ರೀ ಸಿದ್ದೇಶ್ವರ ಬಿದಿರು ಬೆತ್ತದ ಕೆಲಸಗಾರರ ಮತ್ತು ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ., ಅಳಕೋಡು ಹೊಸನಗರ ತಾಲ್ಲೂಕು ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂ:ಡಿಆರ್‌ಎಸ್/ಕಾನೂನು-3/ಡಿಎಲ್‌ಎಸ್/09/2000-01 ದಿನಾಂಕ:12-06-2000.
2. ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರರವರ ಪತ್ರ ನಂ:ಎಆರ್-25/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್-146/2011-12. ದಿನಾಂಕ 13-02-2012.
3. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17-02-2011.

**ಪ್ರಸ್ತಾವನೆ :**

ಸಮಾಪನಾದೇಶಿತ ಶ್ರೀ ಸಿದ್ದೇಶ್ವರ ಬಿದಿರು ಬೆತ್ತದ ಕೆಲಸಗಾರರ ಮತ್ತು ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ., ಅಳಕೋಡು ಹೊಸನಗರ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರ ಆದೇಶ ಸಂ21747/1995-96 ದಿನಾಂಕ 30-09-1995 ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ನೊಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಸಮಾಪನಾಧಿಕಾರಿಯಾಗಿ ನೇಮಿಸಲಾದ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸನಗರ ಇವರು ದಿನಾಂಕ: 09-11-2001 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕ್ಕೆಗೊಂಡಿರುತ್ತಾರೆ. ದಿನಾಂಕ: 22-12-2011 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಸಂಘದ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ ದಿನಾಂಕ:08-11-2001 ಮತ್ತು ದಿನಾಂಕ:22-11-2011ರಂದು ನಡೆದ ಸಮಾಪನಾಧಿಕಾರಿ ಸಭೆಯ ನಡವಳಿಯಂತೆ ಆಸ್ತಿ-ಜವಾಬ್ದಾರಿ ತಃಖ್ತೆಯಂತೆ ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಅನುಮತಿ ನೀಡಲಾಗಿದೆ. ಅದರಂತೆ ದಿನಾಂಕ: 31-03-2010 ಕ್ಕೆ ಇದ್ದಂತೆ ಆಸ್ತಿ-ಜವಾಬ್ದಾರಿ ವಿಲೇವಾರಿ ಮಾಡಿರುತ್ತಾರೆ ಮತ್ತು ದಿನಾಂಕ: 22-12-2011 ಕ್ಕೆ ಇದ್ದಂತೆ ಆಸ್ತಿ – ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ:22-12-2011 ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ :ಡಿಆರ್‌ಎಸ್/ಕಾನೂನು-3/ಡಿಎಲ್‌ಎಸ್/09/2000-01/1850 ದಿನಾಂಕ:29-02-2012.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ 139 ಸಿಎಲ್‌ಎಂ 2011 ದಿನಾಂಕ: 17-02-2011 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಶೋಕ.ವೆಂ.ಮೊರಬ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾದೇಶಿತ ಶ್ರೀ ಸಿದ್ದೇಶ್ವರ ಬಿದಿರು ಬೆತ್ತದ ಕೆಲಸಗಾರರ ಮತ್ತು ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ., ಅಳಕೋಡು ಹೊಸನಗರ ತಾಲ್ಲೂಕು ಈ ಸಹಕಾರ ಸಂಘದ ನೊಂದಣಿ ಸಂಖ್ಯೆ :21747/1995-96 ದಿನಾಂಕ 30-09-1995 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿರ್ಸಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 29–02–2012 ರಂದು ನೀಡಲಾಗಿದೆ.

**ಅಶೋಕ.ವೆಂ.ಮೊರಬ,**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಪಿ.ಆರ್. 364**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–2, ಬೆಂದೂರ್‌ವೆಲ್ ವೃತ್ತ ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ

### ಪ್ರಕಟಣೆ

### ಸಂಖ್ಯೆ : ಡಬ್ಲ್ಯೂಸಿಎ/ಎಸ್.ಆರ್–4/2012(ಎಫ್), ದಿನಾಂಕ 9ನೇ ಮಾರ್ಚ್ 2012

| ಅರ್ಜಿದಾರರು :– | | ಪ್ರತಿವಾದಿಗಳು :– |
|---|---|---|
| 1. ಶ್ರೀಮತಿ ನಥಾಲಿಯ ಬ್ಯಾ @ ಡಿಸೋಜಾ, ಪ್ರಾಯ:75ವರ್ಷ ಕೋಂ: ಲೇಟ್ ಬೆಂಜಮಿನ್ ಡಿ'ಸೋಜಾ ವಾಸ: ಅಮ್ಮಿನಡ್ಕ ಮನೆ, ಕಾವು ಅಂಚೆ, ಮಡ್ನೂರು ಗ್ರಾಮ, ಪುತ್ತೂರು ತಾ: | ವಿರುದ್ಧ | 1. ಶ್ರೀ ಜೆರೋಮೆ ಸಿಕ್ವೇರಾ, ಪ್ರಾಯ: 60ವರ್ಷ ದಿ ಬಿನ್: ಲೇಟ್ ಲಿಯೋ ಸಿಕ್ವೇರಾ, ಟಿಂಬರ್ ಮರ್ಚೆಂಟ್, ಸಾರಥಿ ಕಾಫಿ ಕ್ಯೂರಿಂಗ್ ವರ್ಕ್ಸ್ ಹತ್ತಿರ, ಜ್ಯೋತಿನಗರ, ಚಿಕ್ಕಮಗಳೂರು–577101<br>2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಪಿ.ಬಿ.ನಂ:114, ಕ್ರೆಸೆಂಟ್ ಕೋರ್ಟು, ಕೆ.ಎಂ.ರಸ್ತೆ, ಚಿಕ್ಕಮಗಳೂರು–577101. |

### ಅಧಿಸೂಚನೆ

ಅರ್ಜಿದಾರರಾದ ಶ್ರೀಮತಿ ನಥಾಲಿಯ ಬ್ಯಾ @ ಡಿಸೋಜಾ, ಇವರು ತಮ್ಮ ಮಗನಾದ ಇನಾಸ್ ಡಿ'ಸೋಜಾ (INAS D`SOUZA) ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರನಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ ದಿನಾಂಕ 6–2–2011ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ, ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಇದ್ದರೆ ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ಮೂವತ್ತು (30) ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವುದೇ ಕ್ಲೈಮ್ ಅರ್ಜಿ ಸ್ವೀಕರಿಸದಿದ್ದಲ್ಲಿ, ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎಂ. ಆನಂದ ಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ.ಉಪವಿಭಾಗ–2, ಮಂಗಳೂರು

**ಪಿ.ಆರ್. 361**

## INFRASTRUCTURE DEVELOPMENT SECRETARIAT

### NOTIFICATION

### No. IDD/20/ITS/ 2007 BANGALORE, DATED: 22nd February, 2012

In partial modification of the notification of even number dated 07-09-2011 the tenure of validity of the empanelled list of Transaction Advisors is further extended upto 31-07-2012, in view of the fact that the process of revising / re-empanelling panel of Transaction Advisors is under active consideration of the Government.

By Order and in the name of the Government of Karnataka.
**R.Shivalingaiah,**
Under Secretary to Government ,
Infrastructure Development Department.

**P.R. 357**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಪ್ರಕಟಣೆ

**ಸಂಖ್ಯೆ : ಕವಿಪ/ಶಾರಶಾ/138/ಇತರೆ/2011-12(ಎಫ್), ಬೆಂಗಳೂರು, ದಿನಾಂಕ 06ನೇ ಮಾರ್ಚ್ 2012**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮೃತ್ಯುಂಜಯ ಜಿನಗಾ ಇವರ ವಿಳಾಸ ಬದಲಾವಣೆಯ ಬಗ್ಗೆ.

**ಉಲ್ಲೇಖ:** 1. ಮಾನ್ಯ ಸದಸ್ಯರ ಪತ್ರ ದಿನಾಂಕ: 10-02-2012.

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಮೃತ್ಯುಂಜಯ ಜಿನಗಾ ರವರ ಹೆಸರಿಗೆ ಕಳುಹಿಸುವ ಎಲ್ಲಾ ಪತ್ರ ಹಾಗೂ ಮಾಹಿತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತಳಾಗಿದ್ದೇನೆ.

**ಶ್ರೀ ಮೃತ್ಯುಂಜಯ ಜಿನಗಾ**
**ವಿಧಾನ ಪರಿಷತ್ತಿನ ಸದಸ್ಯರು,**
**ಎಂ.ಎಸ್.ಪಿ ಕಾಂಪ್ಲೆಕ್ಸ್ ಹಿಂಭಾಗ,**
**ರಾಮಕೃಷ್ಣ ಆಶ್ರಮದ ಹತ್ತಿರ,**
**ಸಂಗನಕಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ.**

**ಎಸ್. ನಿರ್ಮಲ,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**ಪಿ.ಆರ್. 362**

## ಕಾರ್ಮಿಕ ಇಲಾಖೆ

**ಕಾರ್ಮಿಕ ಆಯುಕ್ತರವರ ಕಛೇರಿ, ಕರ್ನಾಟಕ "ಕಾರ್ಮಿಕ ಭವನ", ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029.**

### ಅಧಿಸೂಚನೆ

**ಸಂಖ್ಯೆ: ಜಿಜಡ್‌ಟಿ/ಸಿಆರ್-166/2011-12, ಬೆಂಗಳೂರು, ದಿನಾಂಕ: 21-2-2012.**

**ವಿಷಯ:** ಕಾರ್ಮಿಕ ಇಲಾಖೆಯಲ್ಲಿ ದಿನಾಂಕ : 01-01-2012 ರಲ್ಲಿದ್ದಂತೆ 'ಮ್ಯಾನೇಜರ್' ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಣೆ ಬಗ್ಗೆ.

**ಉಲ್ಲೇಖ:**
1. ದಿನಾಂಕ : 08-07-09ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಾಇ 146 ಎಲ್‌ಇಟಿ 2008.
2. ದಿನಾಂಕ : 11-02-10ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 46 ಎಸ್‌ಡಿಎ 2008.
3. ದಿನಾಂಕ : 18-08-06ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 14 ಎಸ್‌ಎಸ್‌ಆರ್ 2006.

1. ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯ ಮೂಲಕ, ದಿನಾಂಕ : 01-01-08 ರಲ್ಲಿದ್ದಂತೆ ಮ್ಯಾನೇಜರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಹಾಗೂ ಸದರಿ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ 02 ರವರೆಗಿನ ಮ್ಯಾನೇಜರ್‌ಗಳ ಜೇಷ್ಠತೆಯನ್ನು ಅಂತಿಮಗೊಳಿಸಲಾಗಿತ್ತು.

2. ಉಲ್ಲೇಖಿತ (2) ರ ಸರ್ಕಾರದ ಅಧಿಸೂಚನೆಯ ಮೇರೆಗೆ, ಗುಂಪು–'ಬಿ' ವೃಂದಕ್ಕೆ, ಇಲಾಖಾ ಮುಖ್ಯಸ್ಥರೇ ನೇಮಕಾತಿ ಪ್ರಾಧಿಕಾರಿಯಾಗಿರುತ್ತಾರೆ. ಹಾಗೂ ಮ್ಯಾನೇಜರ್ ವೃಂದವು ಗುಂಪು–'ಬಿ' ವೃಂದಕ್ಕೆ ಸೇರಿದೆ.

3. ಉಲ್ಲೇಖಿತ (3)ರ ಅಧಿಸೂಚನೆಯಲ್ಲಿ ನೇಮಕಾತಿ ಪ್ರಾಧಿಕಾರವೇ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲು ಬಾಧ್ಯಸ್ಥರು ಎಂದು ತಿಳಿಸಿರುವುದರಿಂದ, ದಿನಾಂಕ : 01–01–12 ರಲ್ಲಿದ್ದಂತೆ ಕಾರ್ಮಿಕ ಇಲಾಖೆಯ 'ಮ್ಯಾನೇಜರ್' ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು, 1957ರ ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಾವಳಿಯ ನಿಯಮ 10ರ ಅಡಿಯಲ್ಲಿ, ಸಂಬಂಧಿತರ ತಿಳುವಳಿಕೆಗಾಗಿ, ಈ ಕೆಳಕಂಡ ಅನುಬಂಧದಲ್ಲಿ ಇರುವಂತೆ ಪ್ರಕಟಿಸಲಾಗಿದೆ.

4. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ (02) ರವರೆಗಿನ ಅಧಿಕಾರಿಗಳ ಜೇಷ್ಠತೆಯನ್ನು ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯ ಮೂಲಕ ಅಂತಿಮಗೊಳಿಸಲಾಗಿರುವುದರಿಂದ, ಕ್ರಮ ಸಂಖ್ಯೆ (3) ರಲ್ಲಿ ನಮೂದಿಸಿರುವ ಮ್ಯಾನೇಜರ್ ರವರು, ಈ ಸಂಬಂಧ (ಜನ್ಮ ದಿನಾಂಕ, ಜೇಷ್ಠತೆ, ಮೀಸಲಾತಿ ಇತ್ಯಾದಿ) ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ, ಈ ಕರಡು ಅಧಿಸೂಚನೆಯು ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗಾಗಿ ಕಾರ್ಮಿಕ ಆಯುಕ್ತರು, ಬೆಂಗಳೂರು–ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿದೆ.

**ಅನುಬಂಧ**

**(ದಿನಾಂಕ 01–01–12 ರಲ್ಲಿರುವಂತೆ 'ಮ್ಯಾನೇಜರ್' ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಹೊಂದಿದ ದಿನಾಂಕ |
|---|---|---|---|---|
| 1. | ಕೆ. ದೇವಕಿ | 30–07–52 | 15–06–73 | 19–02–07 |
| 2. | ಎಸ್. ನಿರ್ಮಲಕುಮಾರಿ (ಎಸ್.ಸಿ) | 11–05–59 | 02–02–83 | 25–02–07 |
| 3. | ಬಿ.ವಿ. ಸುಜಾತ | 01–01–64 | 25–07–84 | 14–10–11 |

**ಪಿ.ಆರ್. 318** **ಕಾರ್ಮಿಕ ಆಯುಕ್ತರು**

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಬೆಂಗಳೂರು ಇವರ ನಡವಳಿ

**ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೃಹಾ. 32/2010–11, ಬೆಂಗಳೂರು, ದಿನಾಂಕ: 06–02–2012.**

**ವಿಷಯ:** ಶ್ರೀ ಆರ್.ಎನ್. ಕಾಂತರಾಜು, ಭೂಮಾಪಕರು, ತಹಸೀಲ್ದಾರ್ ಕಚೇರಿ, ಶಿವಮೊಗ್ಗ ಇವರ ಅನಧಿಕೃತ ಗೈರು ಹಾಜರಿಯ ಶಿಸ್ತು ಕ್ರಮದ ಬಗ್ಗೆ–ಅಂತಿಮ ಆದೇಶ ಹೊರಡಿಸುವ ಕುರಿತು.

**ಉಲ್ಲೇಖ:**

1. ಕೇಂದ್ರ ಕಛೇರಿಯ ಅಧಿಕೃತ ಜ್ಞಾಪನ ಸಂ : ಸಿಬ್ಬಂದಿ. ಅನ್ಯಸೇವೆ. 27/2006–07, ದಿನಾಂಕ : 14–09–2006 ಮತ್ತು 11–12–2006.
2. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ನೀಡಿದ ಕಾರಣ ಕೇಳಿ ನೋಟೀಸು (ದೋಷಾರೋಪಣೆ ಪಟ್ಟಿಯೊಂದಿಗೆ) ಸಂ. ಸಿಬ್ಬಂದಿ (2) ಸಿಸಿಎ 16/2008–09, ದಿನಾಂಕ : 13–12–2008.
3. ನೌಕರರ ಹೇಳಿಕೆ ದಿನಾಂಕ : 11–02–2009.
4. ವಿಚಾರಣಾಧಿಕಾರಿಯನ್ನು ನೇಮಕ ಮಾಡಿದ ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರ ಆದೇಶ ಸಂ. ಸಿಬ್ಬಂದಿ(2) ಸಿಸಿಎ 16/2008–09, ದಿನಾಂಕ : 09–03–2009.
5. ವಿಚಾರಣಾಧಿಕಾರಿಯ ವರದಿ ಸಂ. ಜಿನಕೋ. ಸಿಸಿಎ/ಸಿ.ಆರ್. 15/2008–09, ದಿನಾಂಕ : 27–12–2010.
6. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ಪತ್ರ ಸಂ. ಇಎಸ್‌ಟಿ(2) ಸಿಸಿಎ 16/2008–09, ದಿನಾಂಕ : 14–02–2011.
7. ಕೇಂದ್ರ ಕಛೇರಿಯಿಂದ ನೀಡಿದ 2ನೇ ಕಾರಣ ಕೇಳಿ ನೋಟೀಸ್ (ವಿಚಾರಣಾ ವರದಿಯೊಂದಿಗೆ) ಸಮಸಂಖ್ಯೆ : ದಿನಾಂಕ : 17–05–2011.
8. ಕನ್ನಡಪ್ರಭ ಪತ್ರಿಕೆಯ ದಿನಾಂಕ : 29–11–2011ರ ಪ್ರಕಟಣೆ
9. ಸರ್ಕಾರದ ಸುತ್ತೋಲೆ ಸಂ. ಸಿಆಸುಇ 18 ಸೇಇವಿ 2001, ದಿನಾಂಕ : 14–9–2001.

**ಪ್ರಸ್ತಾವನೆ :**

ಶ್ರೀ ಆರ್.ಎನ್. ಕಾಂತರಾಜು, ಭೂಮಾಪಕರು, ತಹಸೀಲ್ದಾರ್ ಕಚೇರಿ, ಶಿವಮೊಗ್ಗ ಆದ ಇವರು ಈ ಹಿಂದೆ ಆಯುಕ್ತರು, ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಕಛೇರಿಯಲ್ಲಿ ಎರವಲು ಸೇವೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇಲಾಖೆಯಲ್ಲಿ ಭೂಮಾಪಕರ ಕೊರತೆಯಿರುವ

ಕಾರಣ, ನೌಕರರನ್ನು ಮಾತ್ರ ಇಲಾಖೆಗೆ ವಾಪಸ್ಸು ಪಡೆದು, ಈ ಕಛೇರಿಯ ಆದೇಶ ಸಂಖ್ಯೆ : ಸಿಬ್ಬಂದಿ.ಅನ್ಯಸೇವೆ.27/2006–07 ದಿನಾಂಕ : 14–09–2008 ರಲ್ಲಿ ತಹಸೀಲ್ದಾರ್, ಶಿವಮೊಗ್ಗ ಕಛೇರಿಗೆ ಸ್ಥಳ ನಿಯುಕ್ತಿಗೊಳಿಸಲಾಗಿತ್ತು. ಎರವಲು ಸೇವಾ ಪ್ರಾಧಿಕಾರ, ಈ ಕಛೇರಿಯ ಆದೇಶವನ್ನು ಅನುಷ್ಠಾನಗೊಳಿಸದೆ ಈ ಭೂಮಾಪಕರನ್ನು ಎರವಲು ಸೇವೆಯಲ್ಲಿಯೇ ಮುಂದುವರಿಸಿದ್ದು ಇರುತ್ತದೆ. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿದ ನೇಮಕಾತಿ ಪ್ರಾಧಿಕಾರ ಈ ನೌಕರರನ್ನು ಈ ಕಛೇರಿ ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ. ಅನ್ಯಸೇವೆ.27/2006–07, ದಿನಾಂಕ : 11–12–2006 ರಂದು ದಿನಾಂಕ : 16–12–2006 ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅನ್ಯಸೇವೆಯಿಂದ ಬಿಡುಗಡೆಗೊಳಿಸಿ, ವರ್ಗಾಯಿಸಿ ಸ್ಥಳ ನಿಯುಕ್ತಿಗೊಳಿಸಲಾದ ತಹಸೀಲ್ದಾರ್, ಶಿವಮೊಗ್ಗ ಕಛೇರಿಯಲ್ಲಿ ಕೂಡಲೇ ಹಾಜರಾಗಲು ಸೂಚನೆ ನೀಡಿರುತ್ತದೆ.

ಅದರೆ ನೌಕರರು ಸ್ಥಳ ನಿಯುಕ್ತಿಗೊಳಿಸಿದ ತಹಸೀಲ್ದಾರ್, ಶಿವಮೊಗ್ಗ ಕಛೇರಿಗೆ ಹಾಜರಾಗದೆ ಮೇಲಾಧಿಕಾರಿಗಳ ಆದೇಶದ ಉಲ್ಲಂಘನೆ ಮತ್ತು ಸರ್ಕಾರದ ಸೇವೆಯಲ್ಲಿ ತೋರಿದ ಆಶಿಸ್ತಿನ ಹಿನ್ನೆಲೆಯಲ್ಲಿ ಈ ಕಛೇರಿಯ ಆದೇಶ ಸಂಖ್ಯೆ : ಸಿಬ್ಬಂದಿ.ಶಿಸ್ತು. 10/2007–08, ದಿನಾಂಕ : 23–05–2007 ರಂದು ನೌಕರರನ್ನು ಅಮಾನತ್ತುಗೊಳಿಸಲಾಗಿರುತ್ತದೆ. ನಂತರ ದಿನಾಂಕ : 3–10–2007ರ ನಡವಳಿಯಲ್ಲಿ ಅಮಾನತ್ತಿನಿಂದ ತೆರವುಗೊಳಿಸಿ ತಹಸೀಲ್ದಾರ್, ಶಿವಮೊಗ್ಗ ಕಛೇರಿಗೆ ಪುನರ್ ನೇಮಕ ಮಾಡಲಾಗಿದೆ. ಅದರಂತೆ ಈ ನೌಕರರು ದಿನಾಂಕ : 12–10–2007 ರಂದು ತಹಸೀಲ್ದಾರ್, ಶಿವಮೊಗ್ಗ ಕಛೇರಿಗೆ ಕರ್ತವ್ಯದ ಮೇಲೆ ವರದಿ ಮಾಡಿಕೊಂಡಿರುತ್ತಾರೆ. ನಂತರ ನೌಕರರು ದಿನಾಂಕ : 13–10–2007 ಮತ್ತು 14–10–2007ರ ಸಾರ್ವಜನಿಕ ರಜೆಯನ್ನು ಉಪಯೋಗಿಸಿಕೊಂಡು ದಿನಾಂಕ : 15–10–2007 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಇದರಿಂದಾಗಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರು ದಿನಾಂಕ : 13–12–2008 ರಂದು ಕಾರಣ ಕೇಳಿ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ ಹೊರಡಿಸಿರುತ್ತಾರೆ. ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ.

**ಆರೋಪ :**

ಶ್ರೀ ಆರ್.ಎನ್. ಕಾಂತರಾಜು, ಎರಡನೇ ದರ್ಜೆ ಭೂಮಾಪಕರಾದ ನೀವು ತಹಸೀಲ್ದಾರ್, ಶಿವಮೊಗ್ಗ ಕಛೇರಿಗೆ ದಿನಾಂಕ : 12–10–2007 ರಂದು ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿ ನಂತರ ಕಛೇರಿಗೆ ಯಾವುದೇ ರಜೆ ಅರ್ಜಿ ಸಲ್ಲಿಸದೆ. ಕಛೇರಿ ಮುಖ್ಯಸ್ಥರಿಂದ ಪೂರ್ವಾನುಮತಿ ಪಡೆಯದೆ ದಿನಾಂಕ : 15–10–2007 ರಿಂದ ಇದುವರೆಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ, ನಂತರ ರಿಜಿಸ್ಟರ್ಡ್ ಅಂಚೆ ಮೂಲಕ ರಜೆ ಮನವಿ ಸಲ್ಲಿಸಿ, ನಂತರ ಮುಂದುವರೆಸುತ್ತಾ ಬಂದಿದ್ದು, ಈ ನಿಮ್ಮ ನಡವಳಿಕೆ ಬಗ್ಗೆ ಕಾರಣ ಕೇಳಿ ನೋಟೀಸು ಜಾರಿ ಮಾಡಿದ್ದು, ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿದ್ದರೂ ಸಹ ನೀವು ಕರ್ತವ್ಯಕ್ಕೆ ಹಾಜರಾಗದೆ, ಕಛೇರಿ ಮುಖ್ಯಸ್ಥರ ಆದೇಶ ಉಲ್ಲಂಘನೆ ಮಾಡಿರುತ್ತೀರಿ. ಈ ನಡವಳಿಕೆಯಿಂದ ಸರ್ಕಾರಿ ಕೆಲಸ ಹಾಗೂ ಸಾರ್ವಜನಿಕರ ಕೆಲಸಗಳಿಗೆ ತೊಂದರೆ ಉಂಟು ಮಾಡಿರುತ್ತೀರಿ. ಇದರಿಂದಾಗಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿ 1966ರ ನಿಯಮ 3(1)(2)(3) ಉಲ್ಲಂಘನೆಯಾಗಿರುತ್ತದೆ.

ಆಪಾದಿತ ನೌಕರರು ದಿನಾಂಕ : 27–01–2009 ರಂದು ನೋಟೀಸನ್ನು ಸ್ವೀಕರಿಸಿ ದಿನಾಂಕ : 11–02–2009 ರಂದು ನೀಡಿರುವ ಹೇಳಿಕೆಯಲ್ಲಿ ಆರೋಪವನ್ನು ನಿರಾಕರಿಸಿದ ಕಾರಣ, ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರು ತಮ್ಮ ಆದೇಶ ಸಂಖ್ಯೆ : ಸಿಬ್ಬಂದಿ (2) ಸಿಸಿಎ.16/2008–09 ದಿನಾಂಕ : 09–03–2009 ರ ನಡವಳಿಯಲ್ಲಿ ನೌಕರರ ವಿರುದ್ಧ ಮಾಡಿರುವ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯುವ ಬಗ್ಗೆ ವಿಚಾರಣೆ ನಡೆಸಲು, ತಹಶೀಲ್ದಾರ್ ನಗರಾವೃದ್ಧಿ ಕೋಶ, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡಿರುತ್ತಾರೆ. ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣೆಗೆ ಹಾಜರಾದ ಸಾಕ್ಷಿದಾರರ ಹೇಳಿಕೆಯಿಂದ ಮತ್ತು ದಾಖಲೆಗಳ ಆಧಾರದ ಮೇಲೆ ನೌಕರರು ದಿನಾಂಕ ; 15–10–2007 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಮಾಡಿರುವ ಆರೋಪ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಯವರು ವರದಿ ನೀಡಿರುತ್ತಾರೆ. ಆಪಾದಿತರು ಮೂರು ವರ್ಷಗಳಿಗೂ ಹೆಚ್ಚಿನ ಅವಧಿಗೆ ಅನಧಿಕೃತ ಗೈರು ಹಾಜರಾಗಿರುವ ಆರೋಪವು ವಿಚಾರಣಾ ವರದಿಯಿಂದ ಸಾಬೀತಾಗಿರುವುದರಿಂದ, ಕಠಿಣ ದಂಡನೆ ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು, ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರು ನೇಮಕ ಪ್ರಾಧಿಕಾರವಾದ ಈ ಕಛೇರಿಗೆ ಪ್ರಕರಣದ ದಾಖಲೆಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳಿಂದ ಸ್ವೀಕೃತವಾದ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ವಿಚಾರಣಾಧಿಕಾರಿಗಳು, ವಿಚಾರಣೆಯನ್ನು ನಿಯಮಾನುಸಾರ ಕೈಗೊಂಡಿರುತ್ತಾರೆ.

ಪ್ರಕರಣದ ಎಲ್ಲಾ ಸಾಕ್ಷಿದಾರರುಗಳು ವಿಚಾರಣೆಗೆ ಹಾಜರಾಗಿ, ನೌಕರರ ಗೈರು ಹಾಜರಿ ಬಗ್ಗೆ ಹಾಜರಾತಿ ವಹಿಯ ದೃಢೀಕೃತ ಪ್ರತಿಯನ್ನು ಗುರ್ತಿಸಿರುತ್ತಾರೆ. ಮೂರನೇ ಸಾಕ್ಷಿದಾರರಾದ ಶ್ರೀ ಕೆ. ಜಯಪ್ರಕಾಶ್, ಭೂದಾಖಲೆಗಳ ಉಪ ನಿರ್ದೇಶಕರು, ಬೆಂಗಳೂರು ನಗರ ಜಿಲ್ಲೆ ಇವರ ಹೇಳಿಕೆಯಲ್ಲಿ "ತಾವು ಆಪಾದಿತರ ವಿರುದ್ಧದ ಮತ್ತೊಂದು ಶಿಸ್ತು ಪ್ರಕರಣ ಸಂಖ್ಯೆ : ಸಿಬ್ಬಂದಿ.ಶಿಸ್ತು.10/2007–08 ದಿನಾಂಕ : 12–08–2008 ರಂದು ನಡೆಸಿದ ವಿಚಾರಣೆಯಲ್ಲಿ ಆಪಾದಿತರು ಖುದ್ದಾಗಿ ಹಾಜರಾಗಿ, ತಮಗೆ ವೈರಲ್ ಫಿವರ್ ಇರುವುದಾಗಿಯೂ otherwise generally ಆರೋಗ್ಯವಾಗಿದ್ದೇನೆ" ಎಂದು ಸಾಕ್ಷಿ ನುಡಿದಿರುತ್ತಾರೆಂದು ಆ ಕಾರಣ, ಸದರಿಯವರ ಗೈರು ಹಾಜರಿಯನ್ನು ಗಂಭೀರವಾಗಿ ಪರಿಗಣಿಸಲು ಕೋರಿರುತ್ತಾರೆ. ಆಪಾದಿತ ನೌಕರರು ಪಾಟೀ ಸವಾಲಿನಲ್ಲಿ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ರಜೆ ಅರ್ಜಿ ಸಮೇತ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಸದರಿಯವರು ಸಲ್ಲಿಸಿರುವ ವೈದ್ಯಕೀಯ ಪ್ರಮಾಣ ಪತ್ರದಲ್ಲಿ ವೈರಲ್ ಫಿವರ್ ಹೆಪಟೈಟಿಸ್ ಎನ್ನುವ ಖಾಯಿಲೆಯನ್ನು ನಮೂದಿಸಲಾಗಿರುತ್ತದೆ.

ಆಪಾದಿತರು ದಿನಾಂಕ : 15–10–2007 ರಿಂದ ಈವರೆಗೆ ಅಂದರೆ ನಾಲ್ಕು ವರ್ಷಗಳಿಗೆ ಮೇಲ್ಪಟ್ಟು ದೀರ್ಘಾವಧಿಯ ಅನಧಿಕೃತ ಗೈರು ಹಾಜರಾಗಿರುವುದನ್ನು ಗಮನಿಸಿದಾಗ, ವೈರಲ್ ಫೀವರ್ ಹೆಪಟೈಟಸ್ ಖಾಯಿಲೆಗೆ ಇಷ್ಟು ದೀರ್ಘಾವಧಿಯ ಚಿಕಿತ್ಸೆಯ ಅವಶ್ಯಕತೆ ಇರುವುದಿಲ್ಲ, ಆಪಾದಿತರ ವೈದ್ಯಕೀಯ ತಪಾಸಣೆ ಬಗ್ಗೆ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಕೋರಿದಂತೆ, ವೈದ್ಯಕೀಯ ಮಂಡಳಿ, ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರ ಮುಂದೆ ತಪಾಸಣೆಗೆ ಹಾಜರಾಗುವಂತೆ, ದಿನಾಂಕ : 04–04–2008 ಮತ್ತು 21–06–2008ರ ಪತ್ರಗಳಲ್ಲಿ ಜಿಲ್ಲಾ ಸರ್ಜನ್‌ರವರು, ವೈದ್ಯಕೀಯ ಮಂಡಳಿ, ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರು ಆಪಾದಿತರಿಗೆ ಸೂಚಿಸಿದ್ದರೂ, ಆಪಾದಿತರು ತಪಾಸಣೆಗೆ ಹಾಜರಾಗಿರುವುದಿಲ್ಲ. ಈ ಎಲ್ಲಾ ಅಂಶಗಳ ಆಧಾರದ ಮೇಲೆ ಆಪಾದಿತರ ವಿರುದ್ಧ ಮಾಡಿರುವ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ನೀಡಿರುವ ಅಭಿಪ್ರಾಯವನ್ನು, ವಿಚಾರಣಾ ವರದಿ ಮತ್ತು ಇದಕ್ಕೆ ಸಂಬಂಧಿಸಿದ ಪೂರಕ ದಾಖಲೆಗಳ ಪರಿಶೀಲನೆಯಿಂದ ಶಿಸ್ತು ಪ್ರಾಧಿಕಾರ ಒಪ್ಪಿರುತ್ತದೆ. ಕಾರಣ ಆಪಾದಿತರು ಹೇಳಿಕೊಂಡಿರುವ ಖಾಯಿಲೆಯ ಸ್ವರೂಪಕ್ಕೆ ಅಷ್ಟು ಪ್ರಮಾಣದ ರಜೆಯ ಅವಶ್ಯಕತೆ ಇರುವುದಿಲ್ಲವೆಂಬುದು ಸಾಮಾನ್ಯ ಅಭಿಪ್ರಾಯವಾಗಿದೆ. ಸದರಿ ಖಾಯಿಲೆಯಿಂದ ಆಪಾದಿತರು ನೈಜವಾಗಿ ಬಳಲುತ್ತಿದ್ದರೆ, ಯಾವುದೇ ಸಂದರ್ಭದಲ್ಲಿಯಾದರೂ, ಈ ವಿಷಯವನ್ನು ಕಛೇರಿ ಮುಖ್ಯಸ್ಥರ ಗಮನಕ್ಕೆ ತಂದು, ಮನವರಿಕೆ ಮಾಡಿ ರಜೆಯ ಮೇಲೆ ತೆರಳಲು ಹೇರಳ ಅವಕಾಶವಿರುತ್ತದೆ. ಆದರೆ, ಆಪಾದಿತರು ಉದ್ದೇಶಪೂರ್ವಕವಾಗಿ, ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿ, ಸಾರ್ವಜನಿಕ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟು ಮಾಡಿರುವುದು ಸ್ಪಷ್ಟವಾಗಿ ಕಂಡುಬಂದಿದೆ. ಹಾಗೂ ಕೆ.ಸಿ.ಎಸ್. (ನಡತೆ) 1966ರ ನಿಯಮ 3 (i) (ii) ಮತ್ತು (iii) ರ ಸ್ಪಷ್ಟ ಉಲ್ಲಂಘನೆಯಾಗಿದ್ದು, ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದು ಎಲ್ಲಾ ಹಂತದಲ್ಲಿ ಕಂಡುಬಂದಿದೆ.

ಈ ಮೇಲ್ಕಂಡ ಕಾರಣಗಳಿಂದಾಗಿ, ಈ ಕಛೇರಿಯಿಂದ 2ನೇ ಕಾರಣ ಕೇಳಿ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ಜಾರಿ ಮಾಡಲು ತಹಶೀಲ್ದಾರ್, ಶಿವಮೊಗ್ಗರವರ ಮುಖಾಂತರ ಜಾರಿಗಾಗಿ ಕಳುಹಿಸಿದ್ದು, ಆದರೆ 2ನೇ ಕಾರಣ ಕೇಳಿ ನೋಟೀಸು ಜಾರಿ ಮಾಡಲು ಸಾಧ್ಯವಾಗಿಲ್ಲವೆಂದು ತಹಶೀಲ್ದಾರ್, ಶಿವಮೊಗ್ಗ ರವರು ದಿನಾಂಕ : 28–07–2011 ರಂದು ನೋಟೀಸನ್ನು ಹಿಂತಿರುಗಿಸಿರುತ್ತಾರೆ. ನೋಟೀಸು ಜಾರಿ ಮಾಡುವ ಬಗ್ಗೆ, ನೌಕರರ ಸೇವಾವಹಿಯಲ್ಲಿ ನಮೂದಾಗಿರುವ ಸ್ವ ವಿಳಾಸಕ್ಕೆ ಕೇಂದ್ರ ಕಛೇರಿಯ ಸಿಬ್ಬಂದಿಯು ತೆರಳಿದ್ದು, ನೌಕರರು ವಿಳಾಸದಲ್ಲಿ ವಾಸವಿಲ್ಲದೆ, ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ, ನೋಟೀಸನ್ನು ಈ ಕಛೇರಿಗೆ ವಾಪಸ್ಸು ಮಾಡಿರುತ್ತಾರೆ.

ಆದ್ದರಿಂದ ನೋಟೀಸು ಹಾಗೂ ವಿಚಾರಣಾ ವರದಿಯನ್ನು ಮಾಧ್ಯಮ ಮುಖೇನ ಪ್ರಚುರಪಡಿಸಲು ನಿರ್ಧರಿಸಿ ದಿನಾಂಕ : 29–11–2011 ರಂದು ಕರ್ನಾಟಕ ರಾಜ್ಯದ ಬಹು ಮುಖ್ಯ ಪತ್ರಿಕೆಗಳಲ್ಲೊಂದಾದ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಪ್ರಕರಣಕ್ಕೆ ಸಂಬಂಧಿಸಿದಂತೆ ದಿನಾಂಕ : 25–11–2011 ರಂದು ಇಲಾಖಾ ವೆಬ್‌ಸೈಟ್ www.bhoomi.karnataka.gov.in/sslr ರಲ್ಲಿ ಪ್ರಚುರಪಡಿಸಿದ 2ನೇ ಕಾರಣ ಕೇಳಿ ನೋಟೀಸ್ ಮತ್ತು ವಿಚಾರಣಾ ವರದಿಗೆ ರಕ್ಷಣಾ ಹೇಳಿಕೆ ನೀಡಲು ಸೂಚಿಸಲಾಗಿರುತ್ತದೆ. ಆಪಾದಿತರಿಗೆ ಮಾಧ್ಯಮಗಳಲ್ಲಿನ ಪ್ರಚುರಪಡಿಸಿರುವ ಅಂಶವನ್ನು ಓದಿಕೊಂಡು ರಕ್ಷಣಾ ಹೇಳಿಕೆಯನ್ನು ನೀಡಲು ಅವಕಾಶ ಕಲ್ಪಿಸಿದ್ದರೂ, ಇಲ್ಲಿಯವರೆಗೂ ಯಾವುದೇ ಹೇಳಿಕೆ ನೀಡಿರುವುದಿಲ್ಲ.

ಮೇಲ್ಕಂಡ ಎಲ್ಲ ಅಂಶಗಳನ್ನು ಪರಿಶೀಲಿಸಿದಾಗ, ಯಾವುದೇ ಪ್ರಬಲ ಕಾರಣವಿಲ್ಲದಿದ್ದರೂ, ನಾಲ್ಕು ವರ್ಷಗಳಿಗೂ ಮೇಲ್ಪಟ್ಟು ದೀರ್ಘಾವಧಿಯ ಗೈರು ಹಾಜರಾಗಿದ್ದು, ಗೈರು ಹಾಜರಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಗಂಭೀರ ತೆರನಾದ ಕರ್ತವ್ಯ ಚ್ಯುತಿ ಎಸಗಿದ್ದು, ಎರಡನೇ ಕಾರಣ ಕೇಳಿ ನೋಟೀಸಿಗೆ ಉತ್ತರವಾಗಿ ತಮ್ಮನ್ನು ರಕ್ಷಿಸಿಕೊಳ್ಳುವ ಯಾವುದೇ ಹೇಳಿಕೆಯನ್ನು ನೀಡದಿರುವ ಬಗ್ಗೆ ಪರಿಶೀಲಿಸಲಾಗಿ, ಸದರಿಯವರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ಧೆ, ಆಸಕ್ತಿ ಇಲ್ಲದಿರುವುದು ಕಂಡುಬರುತ್ತಿದ್ದು, ಆರೋಪ ಸಾಬೀತಾಗಿರುವ ಬಗ್ಗೆ ವಿಚಾರಣಾ ವರದಿಯನ್ನು, ಸಾಕ್ಷ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಆಪಾದಿತರು ಸರ್ಕಾರಿ ಸೇವೆಯಲ್ಲಿ ಮುಂದುವರಿಯಲು ಅನರ್ಹರೆಂದು ಹಾಗೂ ಆಪಾದಿತರಿಗೆ ಕಠಿಣ ದಂಡನೆ ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಆರ್.ಎನ್. ಕಾಂತರಾಜು, ಭೂಮಾಪಕರು, ತಹಶೀಲ್ದಾರ್ ಕಛೇರಿ, ಶಿವಮೊಗ್ಗ ಇವರು ದಿನಾಂಕ : 15–10–2007 ರಿಂದ 13–12–2008 ರವರೆಗೆ ಅನಧಿಕೃತ ಗೈರು ಹಾಜರಾಗಿರುವುದು ವಿಚಾರಣೆಯಿಂದ ಸಾಬೀತಾಗಿರುತ್ತದೆ. ದಿನಾಂಕ : 15–10–2007 ರಿಂದ ಇಂದಿನವರೆಗೆ (ಆದೇಶ ಜಾರಿಯಾಗುವವರೆಗೂ) ಸರ್ಕಾರಿ ಕೆಲಸಕ್ಕೆ ದೀರ್ಘಕಾಲದವರೆಗೆ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರೆಯುತ್ತಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 108ನ್ನು ಆಕರ್ಷಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11 ರನ್ವಯ ವಿಚಾರಣೆಯನ್ನು ಕೈಗೊಂಡಿದ್ದು ಆಪಾದಿತ ನೌಕರರು ಗಂಭೀರವಾದ ಕರ್ತವ್ಯ ಲೋಪ ಮತ್ತು ದುರ್ವತನೆ ಎಸಗಿರುವುದು ವಿಚಾರಣೆಯಿಂದ ಸ್ಪಷ್ಟವಾಗಿ ದೃಢಪಟ್ಟಿರುತ್ತದೆ.

**"ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 108ರ ಪ್ರಕಾರ ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು ನಾಲ್ಕು ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೆ ಕರ್ತವ್ಯದಿಂದ ವಿಮುಖರಾಗಿ ಗೈರು ಹಾಜರಾಗುವ ಸರ್ಕಾರಿ ನೌಕರರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರಲ್ಲಿ ನಮೂದಿಸಲಾದ ಕಾರ್ಯ ವಿಧಾನವನ್ನುಸರಿಸಿ ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ".**

ಈ ಮೇಲ್ಕಂಡ ಕಾರಣಗಳಿಂದಾಗಿ ಆಪಾದಿತರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವ ಆಸಕ್ತಿ ಇಲ್ಲದೆ ಇರುವುದು ಕಂಡುಬಂದಿದೆ. ಈ ಪ್ರಕರಣದಲ್ಲಿ ಆಪಾದಿತರು ಯಾವುದೇ ಪ್ರಬಲ ಕಾರಣವಿಲ್ಲದೆ, ಸರ್ಕಾರಿ ಕೆಲಸಕ್ಕೆ ಹಾಜರಾಗದೆ ದಿನಾಂಕ : 15–10–2007 ರಿಂದ ಇಲ್ಲಿಯವರೆಗೆ

ಅನಧಿಕೃತ ಗೈರು ಹಾಜರಾಗಿರುವುದು ತೀವ್ರತರನಾದ ದುರ್ವತನೆ ಆಗಿರುವುದರಿಂದ ಹಾಗೂ ಅವರ ವಿರುದ್ಧ ಮಾಡಲಾದ ಆರೋಪವು ವಿಚಾರಣೆಯಿಂದ ಖಚಿತವಾಗಿ ಸಾಬೀತಾಗಿರುವ ಹಿನ್ನೆಲೆಯಲ್ಲಿ, ವಿ. ಪೊನ್ನುರಾಜ್, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು, ಆದ ನಾನು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 9(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 8(viii) ರನ್ವಯ ಶ್ರೀ ಆರ್.ಎನ್. ಕಾಂತರಾಜು, ಭೂಮಾಪಕರು, ತಹಶೀಲ್ದಾರ್ ಕಛೇರಿ, ಶಿವಮೊಗ್ಗ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

**ಆಯುಕ್ತರು**
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

**ಪಿ.ಆರ್. 231**

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು.

### ಅಧಿಸೂಚನೆ

### ಸಂಖ್ಯೆ : ಕೃಮಾಇ/03/ಚುನಾವಣೆ/2011, ದಿನಾಂಕ : 9/12–3–2012.

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11ರ ಉಪ ಪ್ರಕರಣ (1) (viii) ರಲ್ಲಿನ ಅಧಿಕಾರದ ಮೇರೆಗೆ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಸಿ. ಸೋಮಶೇಖರ ಆದ ನಾನು ಈ ಕಛೇರಿಯ ಅಧಿಸೂಚನೆ ಸಂ. : ಕೃಮಾಇ/03/ಚುನಾವಣೆ/2011, ದಿನಾಂಕ: 22–12–2011 ರಲ್ಲಿ ಅರಸೀಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಾಡಿದ್ದ ಇಲಾಖಾ ಪ್ರತಿನಿಧಿ ನಾಮನಿರ್ದೇಶನವನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ರದ್ದುಗೊಳಿಸಿ, ಈ ಕೆಳಕಂಡ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ಪ್ರತಿನಿಧಿ ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ಹಾಸನ | ಅರಸೀಕೆರೆ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ತಿಪಟೂರು. |

**ಸಿ. ಸೋಮಶೇಖರ**
ನಿರ್ದೇಶಕರು.

**ಪಿ.ಆರ್. 371**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 12 (7) OF THE KARNATAKA TAX ON ENTRY OF GOODS ACT-1979.

**Sub:** KTEG Act, 1979-Clarification of rate of tax on parts of Earthmovers, JCB, dippers, dumpers, excavators-reg.

**Ref:** Application dt. 14-2-2012 of M/s Sri Venkatgiri Enterprises, Hubli-580031 TIN 29710248281.

In the application cited above, M/s Sri Venkatgiri Enterprises, 'Neelima Nilay' Kundgol Building, Vidyanagar, Hubli-580031 has sought clarification regarding the rate of entry tax on parts of earthmovers, JCB, dippers, dumpers, excavators, bulldozers, motor grader, wheel loader.

2. Section 12(7) of the Karnataka Tax on Entry of Goods Act,1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. KTEG/CLR/CR-29/11-12, DATED 08-3-2012.**

It is clarified that parts and accessories used exclusively for earthmovers such as dumpers, dippers, bulldozers and the like and adopted for use on road are not liable to entry tax.

**PRADEEP SINGH KHAROLA**
Commissioner of Commercial Taxes,
(Karnataka), Bangalore.

**P.R. 373**

## PROCEEDINGS OF THE HIGH COURT OF KARNATAKA, BANGALORE

**Sub :** Grant of functional promotion as District Judge (Selection Grade) and rectification in date of retirement of Sri Jyaram Ramakrishna Hegde, District Judge (retired) for-reg.

**Read :**

1. This office letter dated 5-5-2003 addressed to the Chief Secretary to Government of Karnataka, Bangalore.
2. High Court Order dated 3-12-2010 passed in W.P.No. 25195/2003.
3. Representation dated 5-1-2011 of Sri Jayaram Ramakrishna Hegde, District Judge (retired).
4. Resolution dated 12-1-2012 of the High Court Administrative Committee.

Sri Jayaram Ramakrishna Hegde. District Judge (retired), while he was working as District Judge. was appointed as the President, District Consumer Forum w.e.f. 14-6-2002 prior to his retirement from judicial service on attaining the age of superannuation i.e. 58 years on 30-4-2003. Accordingly, he was relieved from the charge of his post from the forenoon of 13-6-2002.

Subsequenty, when his case was taken up for screening for continuing his services beyond 58 years and up to 60 years of age, the Hon'ble High Court came to the conclusion that once a judicial officer is appointed as the President of the Dirstrict Consumer Forum on whole time basis under Section 10 of the Consumer Protection Act, read with Rule 3, he ceases to be a judicial officer and hence the question of considering the utility of the said officer for continuance beyond the age of 58 years as per Rule 95-A of the Karnataka Civil Services Rules, does not arise. The said opinion of the High Court was communicated to the said Officer vide this office letter dated 5-5-2003 cited at ref. (1) above.

The said High Court communication was challenged by the above officer before the High Court of Karnataka, Bangalore, in W.P. No. 25195/2003 praying for quashing of said communication dated 5-5-2003 and for all consequential benefits including extension of his services until he reaches the age of 60 years with other monetary benefits. The Hon'ble High Court allowed the said writ petition vide order dated 3-12-2010 cited at ref (2) above.

As per the orders of the High Court, the officer submitted representation cited at ref. (3) above requesting for grant of functional promotion as District Judge (Selection Grade) and permitting him to retire from judicial service w.e.f. 30-4-2005 after attaining the age of 60 years with all consequential benefits as per final decision in W.P.No. 25195/2003(S). The said representation of the officer was placed before the Hon'ble Administrative Committee in its meeting held on 12-1-2012. As per the resolution of the said committee cited at ref (4), the following order is passed.

**ORDER NO. GOB (I) 170/2006, BANGALORE, DATED : 28th DAY OF FEBRUARY, 2012.**

Sri Jayaram Ramakrishna Hegde, District Judge (Retired), is granted functional promotion as **District Judge (Selection Grade)** in terms of the Government Order No. LAW 26 LAC 2005, dated : 22-4-2006 in the pay scale of Rs. 18,750-400-19,150-450-21,850-500-23,850 with effect from 1-1-2004, as mentioned below.

| Sl. No. | Name of the Officer | Date of entry into the cadre of District Judges | Date of grant of functional promotion as District Judge (Selection Grade) | Remarks |
|---|---|---|---|---|
| 1. | Sri Jayaram Ramakrishna Hegde, District Judge (Retd.) | 25-5-1998 | 1-1-2004 | Deemed date of retirement is 30-4-2005 |

By Order of the High Court,

**P. KRISHNA BHAT**

Registarar General.

**P.R. 372**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪವಿಭಾಗ 2, ಬೆಂದೂರ್‌ವೆಲ್ ವೃತ್ತಕಂಕವಾಡಿ, ಮಂಗಳೂರು ಇವರ ನ್ಯಾಯಾಲಯ**

**ಅಧಿಸೂಚನೆ**

**ಸಂಖ್ಯೆ : ಡಬ್ಲ್ಯೂಸಿಎ/ಎಸ್.ಆರ್.–5/2012(ಎಫ್), ದಿನಾಂಕ : 14–3–2012.**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1. ಶ್ರೀಮತಿ ರಶೀದ, ಪ್ರಾಯ 23 ವರ್ಷ, ಕೋಂ : ಲೇಟ್ ರಿಫೀಕ್,<br>2. ಅಯಿಷತ್ತುಲ್ ಅಲ್ಮಾಸ್, ಪ್ರಾಯ 3 ವರ್ಷ ಬಿನ್ ಲೇಟ್ ರಫೀಕ್,<br>3. ಆಯಿಷತ್ತುಲ್ ಅಸ್ಲೀಯಾ, ಪ್ರಾಯ 2 ವರ್ಷ ಬಿನ್ : ಲೇಟ್ ರಫೀಕ್, ವಾಸ : ಎಂಜಿರಡ್ಕ ಮನೆ, ಬಜತ್ತೂರು ಅಂಚೆ ಮತ್ತು ಗ್ರಾಮ, ಪುತ್ತೂರು ತಾ. | 1. ಶ್ರೀ ಹಮೀದ್ ಪಿ.ಎ., ಪ್ರಾಯ 55 ವರ್ಷ, ಬಿನ್ ಅಬ್ಬು ಹಾಜಿ ವಾಸ : ಪೆಲಕಡ್ಯ ಹೌಸ್, ಬಂಟ್ರೆ ಗ್ರಾಮ, ಪುತ್ತೂರು ತಾಲ್ಲೂಕು.<br>2. ಶಾಖಾಧಿಕಾರಿ, ರೋಯಲ್ ಸುಂದರಂ ಅಲಿಯಾನ್ಸ್ ಇನ್ಸೂರೆನ್ಸ್ ಕಂ. ಲಿ., 3ನೇ ಮಹಡಿ, ಶಾಲಿಮಾರ್ ಕಾಂಪ್ಲೆಕ್ಸ್ ಫ್ಲವರ್ ಮಾರ್ಕೆಟ್‌ನ ಎದುರುಗಡೆ, ಕಂಕನಾಡಿ, ಮಂಗಳೂರು ತಾಲ್ಲೂಕು. |

ಅರ್ಜಿದಾರರಾದ ಶ್ರೀಮತಿ ರಶೀದ, ಇವರು ತನ್ನ ಗಂಡನಾದ ರಫೀಕ್, 1ನೇ ಪ್ರತಿವಾದಿಗಳಲ್ಲಿ ಕೆಲಸಗಾರನಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ : 7–12–2011 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ, ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ಮೂವತ್ತು (30) ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗಧಿತ ಸಮಯದಲ್ಲಿ ಈ ನ್ಯಾಯಾಲಯವು ಯಾವುದೇ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ, ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎಂ. ಆನಂದಮೂರ್ತಿ**

ಕಾರ್ಮಿಕ ಅಧಿಕಾರಿ ಹಾಗೂ

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.

ಉಪವಿಭಾಗ–2, ಮಂಗಳೂರು

**ಪಿ.ಆರ್. 384**

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯ ನಡವಳಿಗಳು

**ಆದೇಶ**

**ಸಂಖ್ಯೆ : ಡಿಪಿಎನ್ : ಸಿಶಾ–1ಎ: 20 : 2011–12, ಬೆಂಗಳೂರು, ದಿನಾಂಕ : 12–3–2012.**

**ವಿಷಯ** : 2011–12ರ ಸಾಲಿನಲ್ಲಿ "ಗ್ರೂಪ್–ಬಿ" ವರ್ಗದ ಸಹಾಯಕ ಸರ್ಕಾರಿ ಅಭಿಯೋಜಕರುಗಳ ವರ್ಗಾವಣೆಯ ಬಗ್ಗೆ.

**ಉಲ್ಲೇಖ** : ಸರ್ಕಾರದ ಪತ್ರ ಸಂಖ್ಯೆ : ಒಇ 527 ಪಿಪಿಇ 2011, ದಿನಾಂಕ : 3–3–2012.

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ವರ್ಗಾವಣೆ ಮಾಡಲು ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅನುಮತಿಯನ್ನು ನೀಡಿರುತ್ತದೆ. ಸರ್ಕಾರದ ಅನುಮತಿಯಂತೆ ಅಂಕಣ (2) ರಲ್ಲಿ ನಮೂದಿಸಿರುವ ಅಧಿಕಾರಿಗಳನ್ನು ಅಂಕಣ (3) ರಲ್ಲಿ ನಮೂದಿಸಿರುವ ಸ್ಥಳಗಳಿಗೆ ಕೋರಿಕೆಯ ಮೇರೆಗೆ ವರ್ಗಾವಣೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು, ಪದನಾಮ ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾವಣೆ ಮಾಡಲಾದ ಕಛೇರಿ ಮತ್ತು ಸ್ಥಳ |
|---|---|---|
| 1. | ಆರ್. ರವಿಚಂದ್ರ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೋಲಾರ | ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕನಾಯಕನಹಳ್ಳಿ (ಖಾಲಿ ಹುದ್ದೆಗೆ) |
| 2. | ಮಹೇಶ ಕಾಮನಗೌಡ ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಆಳಂದ | ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗೋಕಾಕ್ (ಖಾಲಿ ಹುದ್ದೆಗೆ) |
| 3. | ಎಂ.ಕೆ. ಪ್ರಫುಲ್ಲ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಾಮರಾಜನಗರ | ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಶ್ರೀರಂಗಪಟ್ಟಣ |

ಮೇಲ್ಕಂಡ ಅಧಿಕಾರಿಗಳ ವರ್ಗಾವಣೆಯು ಕೋರಿಕೆಯ ಮೇರೆಗೆ ಆಗಿರುವುದರಿಂದ, ಅವರುಗಳು ಯಾವುದೇ ರೀತಿಯ ವರ್ಗಾವಣೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

ಈ ಆದೇಶವು ಕೂಡಲೇ ಜಾರಿಗೆ ಬಂದಿದ್ದು, ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**ಹೆಚ್.ಆರ್. ರೇಣುಕ**
ಅಭಿಯೋಗ ಮತ್ತು ಸರ್ಕಾರಿ
ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು

**ಪಿ.ಆರ್. 374**

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ನಅಇ 201 ಬೆಮಪ್ರಾ 2010, ಬೆಂಗಳೂರು, ದಿನಾಂಕ : 14–3–2012.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4–(ಎ)(1) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ರಾಮದುರ್ಗ ಸ್ಥಳೀಯ ಯೋಜನಾ ಪ್ರದೇಶವನ್ನು ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ. ಹಾಗೂ ಇದೇ ಕಾಯ್ದೆಯ ಕಲಂ 4–ಸಿ(1)ರನ್ವಯ ರಾಮದುರ್ಗ ಸ್ಥಳೀಯ ಯೋಜನಾ ಪ್ರದೇಶಕ್ಕೆ ಯೋಜನಾ ಪ್ರಾಧಿಕಾರವಾಗಿ ಕೂಡಲೇ ಜಾರಿಗೆ ಬರುವಂತೆ ಕಾರ್ಯನಿರ್ವಹಿಸತಕ್ಕದ್ದು.

ಅನುಬಂಧ–1 ರಲ್ಲಿ ರಾಮದುರ್ಗ ಪುರಸಭೆಯ ಎಲ್ಲೆಯಲ್ಲಿ ಬರುವ ಪಟ್ಟಣ ಗ್ರಾಮಗಳು ಮತ್ತು ಸರ್ವೆ ನಂಬರುಗಳ ವಿವರಗಳನ್ನು ಹಾಗೂ ಅನುಬಂಧ–2ರಲ್ಲಿ ರಾಮದುರ್ಗ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಗಡಿಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

ರಾಮದುರ್ಗ ಪುರಸಭೆಯ ಎಲ್ಲೆಯಲ್ಲಿ ಬರುವ ಪಟ್ಟಣ ಗ್ರಾಮಗಳು ಮತ್ತು ಸರ್ವೇ ನಂಬರುಗಳ ವಿವರಗಳು

| ಕ್ರಮ ಸಂಖ್ಯೆ | ಪಟ್ಟಣ ಹಾಗೂ ಗ್ರಾಮದ ಹೆಸರು | ವಿಸ್ತರಿಸುವ ಪ್ರದೇಶ |
|---|---|---|
| 1. | ತುರನೂರು ಗ್ರಾಮ | ರಿ.ಸ.ನಂ. 23 ಪೈಕಿ, ರಿ.ಸ.ನಂ. 24 ರಿಂದ ರಿ.ಸ.ನಂ. 45, ರಿ.ಸ.ನಂ. 52 ರಿಂದ 55, ರಿ.ಸ.ನಂ. 266, 267, 268, 269, 270 ಹಾಗೂ ರಾಮದುರ್ಗ ಗಾಂವಾ ಠಾಣಾ |
| 2. | ಕಿಲಬನೂರು ಗ್ರಾಮ | ಕಿಲಬನೂರು ಗ್ರಾಮ ಠಾಣಾ ಮತ್ತು ಸರ್ವೇ ನಂ. 1 ರಿಂದ 74 ರವರೆಗೆ, ಸರ್ವೇ ನಂ 87 ಪೈಕಿ, ಸರ್ವೇ ನಂ. 162 ರಿಂದ 248 ರವರೆಗೆ ಸರ್ವೇ ನಂ. 253 ರಿಂದ 280 ರವರೆಗೆ ಸೇರ್ಪಡೆಯಾಗಿರುತ್ತದೆ. (ರಾಮದುರ್ಗ ಪಟ್ಟಣ) |

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–2**

ರಾಮದುರ್ಗ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಗಡಿಯ ಕಿಲಬನೂರು ಗ್ರಾಮದ ರಿ.ಸ.ನಂ. 45ರ ವಾಯುವ್ಯ ಮೂಲೆಯಿಂದ ರಿ.ಸ.ನಂ. 46, 47, 48, 49. 51, 52, 54, 55, 56, 62, 63, 64, 65, ರವರೆಗೆ ಉತ್ತರ ಗಡಿಯಲ್ಲಿ ಮುಂದವರೆದು ದಕ್ಷಿಣಕ್ಕೆ ತಿರುಗಿ ಸ.ನಂ. 72ರ ವಾಯುವ್ಯ ದಿಕ್ಕನ್ನು ತಲುಪಿ ಪೂರ್ವಕ್ಕೆ ರಿ.ಸ.ನಂ. 72, 73, 74 ಹಾಗೂ ರಿ.ಸ.ನಂ. 162 ರ ಉತ್ತರ ಗಡಿಯಲ್ಲಿ ಮುಂದುವರೆಯುತ್ತದೆ. 162 ರ ಈಶಾನ್ಯ ಬಿಂದುವಿನಿಂದ ದಕ್ಷಿಣ ದಿಕ್ಕಿನಲ್ಲಿ ಸ.ನಂ. 163, 1, 253, 164, 165ರ ಪೂರ್ವದ ಗಡಿಯಲ್ಲಿ ಮುಂದುವರೆದು ಮಲಪ್ರಭಾ ನದಿಯ ಉತ್ತರ ಗಡಿಯನ್ನು ತಲುಪುತ್ತದೆ. ನಂತರ, ಸದರಿ ನದಿಯ ಉತ್ತರ ಗಡಿಯಲ್ಲಿ, ಪಶ್ಚಿಮಾಭಿಮುಖವಾಗಿ ಮುಂದುವರೆದು ತುರುನೂರು ಗ್ರಾಮದ ಸ.ನಂ. 266ರ ನೈರುತ್ಯ ಮೂಲೆಯನ್ನು ತಲುಪುತ್ತದೆ. ಸ.ನಂ. 266ರ ನೈರುತ್ಯ ಮೂಲೆಯಿಂದ ಉತ್ತರಕ್ಕೆ ಸ.ನಂ. 55, 54ರ ಪಶ್ಚಿಮ ಗಡಿಯಲ್ಲಿ ಮುಂದುವರೆದು ಬೆಳಗಾವಿ ಜಿಲ್ಲಾ ಮುಖ್ಯ ರಸ್ತೆಯನ್ನು ತಲುಪುತ್ತದೆ. ಸದರಿ ರಸ್ತೆಯಿಂದ ಆಗ್ನೇಯ ದಿಕ್ಕಿನಲ್ಲಿ ಮುಂದುವರೆದು ರಿ.ಸ.ನಂ. 43ರ ನೈರುತ್ಯ ಮೂಲೆಯನ್ನು ತಲುಪುತ್ತದೆ. ನಂತರ ಉತ್ತರ ದಿಕ್ಕಿನಲ್ಲಿ ರಿ.ಸ.ನಂ. 44ರ ಮೂಲೆಯವರೆಗೆ ಮುಂದುವರೆದು ರಿ.ಸ.ನಂ. 44, 45ರ ದಕ್ಷಿಣಕ್ಕೆ ಪಶ್ಚಿಮ ದಿಕ್ಕಿನಲ್ಲಿ ಮುಂದುವರೆದು ರಿ.ಸ.ನಂ. 45ರ ನೈರುತ್ಯ ಮೂಲೆಯನ್ನು ತಲುಪಿ ಉತ್ತರಕ್ಕೆ ತಿರುಗಿ ಗ್ರಾಮ ರಸ್ತೆಯನ್ನು ತಲುಪುತ್ತದೆ. ಗ್ರಾಮ ರಸ್ತೆಯ ಗಡಿಯಿಂದ ಆಗ್ನೇಯ ದಿಕ್ಕಿನಲ್ಲಿ ಸ.ನಂ. 45, 44, 42 ಗಳಲ್ಲಿ ಮುಂದುವರೆದು ರಿ.ಸ.ನಂ. 33 ರ ನೈರುತ್ಯ ಮೂಲೆಯನ್ನು ತಲುಪುತ್ತದೆ. ನಂತರ ಪುನಃ ಉತ್ತರಕ್ಕೆ ತಿರುಗಿ ರಿ.ಸ.ನಂ. 33ರ ವಾಯುವ್ಯ ಮೂಲೆಯನ್ನು ತಲುಪಿ ಪೂರ್ವಕ್ಕೆ ಮುಂದುವರೆದು ರಿ.ಸ.ನಂ. 33ರ ಈಶಾನ್ಯ ಗಡಿಯಿಂದ ಉತ್ತರಕ್ಕೆ ತಿರುಗಿ ರಿ.ಸ.ನಂ. 23/ಬಿರ ನೈರುತ್ಯ ದಿಕ್ಕನ್ನು ತಲುಪುತ್ತದೆ. ನಂತರ ರಿ.ಸ.ನಂ.23/ಬಿರ ದಕ್ಷಿಣ ಗಡಿಯಲ್ಲಿ ಪೂರ್ವಾನುಮುಖವಾಗಿ ಚಲಿಸಿ ತುರುನೂರು ಗ್ರಾಮದ ಗಡಿಯನ್ನು ತಲುಪುತ್ತದೆ. ತುರುನೂರು ಗ್ರಾಮದ ಗಡಿಯಲ್ಲಿ ಉತ್ತರಕ್ಕೆ ತಿರುಗಿ ಕಿಲಬನೂರು ಗ್ರಾಮದ ಸ.ನಂ. 88ರ ನೈರುತ್ಯ ಮೂಲೆಯನ್ನು ತಾಕಿ ಪೂರ್ವಕ್ಕೆ ತಿರುಗಿ ರಿ.ಸ.ನಂ. 87ರ ಗುಡ್ಡದ ಪ್ರದೇಶದಲ್ಲಿ ಮುಂದುವರೆದು ರಿ.ಸ.ನಂ. 45ರ ವಾಯುವ್ಯ ದಿಕ್ಕನ್ನು ತಲುಪುತ್ತದೆ.

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 387**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

### ಅಧಿಸೂಚನೆ

**ಸಂಖ್ಯೆ : ಬಿ3 : ಅಮೊ. ವಾಹನ.ವಿವ : 35/11–12, ದಿನಾಂಕ : 12–3–2012.**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂಧಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಮಾರುತಿ ವ್ಯಾನ್ ಕೆಎ–15–ಎಂ–575 | ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ : 118/11–12, ದಿನಾಂಕ : 21–1–2012 | 1383423 | ST-91-IN-171627 |
| 2. | ಪಿಗೋ ಅಪೇ ಕೆಎ–47–2760 | ಆನವಟ್ಟಿ ವಲಯದ ಅ.ಮೊ. ಸಂಖ್ಯೆ : 92/11–12, ದಿನಾಂಕ : 25–12–2011 | Not Visible | Not Visible |
| 3. | ಮಾರುತಿ ವ್ಯಾನ್ ಕೆಎ–03–ಸಿ–1535 | ಅರಣ್ಯ ಸಂಚಾರಿದಳ, ಶಿಕಾರಿಪುರ ಅ.ಮೊ. ಸಂಖ್ಯೆ : 46/11–12, ದಿನಾಂಕ : 22–1–2012 | F8BIN-2225053 | ST-91-IN-53506 |
| 4. | ಮಾರುತಿ ವ್ಯಾನ್ ಜಿಎ–02–ಎ–6563 | ಸಾಗರ ವಲಯದ ಅ.ಮೊ. ಸಂಖ್ಯೆ : 88/11–12, ದಿನಾಂಕ : 9–2–2012 | Not Visible | Not Visisble |
| 5. | ಟಿ.ವಿ.ಎಸ್. ಸ್ಟಾರ್‌ಸಿಟಿ ಬೈಕ್ ನಂಬರ್ ಇಲ್ಲಾ | ಸಾಗರ ವಲಯದ ಅ.ಮೊ. ಸಂಖ್ಯೆ : 88/11–12, ದಿನಾಂಕ: 9–2–2012 | AFIAC1519665 | MD625NF1161A10277 |
| 6. | ಟಾಟಾ–209 ಕೆಎ–23–7071 | ಸಾಗರ ವಲಯದ ಅ.ಮೊ. ಸಂಖ್ಯೆ : 93/11–12, ದಿನಾಂಕ : 17–2–2012 | Not Visible | 386040B00804331 |
| 7. | ಹಿರೋಹೊಂಡಾ ಬೈಕ್ ಕೆಎ–51–ವೈ–8310 | ಸಾಗರ ವಲಯದ ಅ.ಮೊ. ಸಂಖ್ಯೆ : 93/11–12, ದಿನಾಂಕ : 17–2–2012 | HA10EFBHA63470 | MBLHA10EYBHA05926 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ, ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಪಿ.ಆರ್. 385**

**OFFICE OF THE REGISTRAR / RETURNING OFFICER, KARNATAKA BOARD OF HOMOEOPATHIC SYSTEM OF MEDICINE, BANGALORE**

NOTIFICATION NO.KBHSM/150/2011-2012, DATED 28-02-2012

The names of Registered Homoeopathic Practitioners entered in Part A and B as on 31st January 2012 as per section 34 and also Preliminary Electoral Roll as per Rule 3 (2) & (4) of Karnataka Homoeopathic Practitioners' Act 1961 and Rules, 1964 thereunder for the ensuing Elections of Members of Karnataka Board of Homoeopathic System of Medicine is published as in the Annexure to this Notification.

Claims and Objections if any relating to the entries or omissions in the preliminary Electrol Roll were called for from the practitioners who have renewed /registered their names for life membership to the undersigned on or before 27-3-2012 upto 5 p.m. According to Sub Sec (4) of Sec.3 of the Karnataka Board of Homoeopathic System of Medicine Election Rules 1964 revised Preliminary Electoral Roll in respect of Part A and Part B of the Register is published.

**Dr. Aswathnarayana, MD (Hom.)**
**Registrar/Returning Officer.**

**REVISED PRELIMINARY ELECTORAL ROLL CONTAINING THE LIST OF PERSONS QUALIFIED TO VOTE UNDER SUB CLAUSES (a) AND (b) RESPECTIVELY TO CLAUSES (iii) OF SUB SECTION (2) OF SECTION (3) OF THE HOMOEOPATHIC PRACTITIONERS ACT 1961.**

**LIST OF REGISTERED HOMOEOPATHIC PRACTIONERS ELIGIBLE FOR VOTING (SUB RULE 2 & 4 OF RULE 3)**

| Sl. No. | Reg. No. | Name | Q'fica tion | Address |
|---|---|---|---|---|
| 1 | 2 | 3 | 4 | 5 |
| 1. | 9420 | Dr. Aabida | BHMS | C/o.Abidas, Students Stores, Delanipur, Haddo, P.O.744 102, Portblair, Andaman. |
| 2. | 8453 | Dr. Aafreen Tabassum | BHMS | Aafreen Manzil, Muslim Galli, Sirsi-581401, Karwar, Uttara Kannada. |
| 3. | 10772 | Dr. Aaishyamubeena | BHMS | Darul Fazal, Plot No.97, 2nd Main, I Cross, Near BDA Garden, Viveknagar (West), Bijapur-586 101. |
| 4. | 9964 | Dr. Aaliya Praveen Lahori | BHMS | C/o. M.A. Lahori, Near Mahtar Mahal, J.M. Road, Bijapur-586 101. |
| 5. | 3393 | Dr. Aarons Rathna Shobha Letitia | GCEH | C/4, Sheetal Flats, Vijodi, Mangalore-575002. |
| 6. | 7794 | Dr. Aarti Katti | BHMS | 1806, Trupti Buidling, Kelkar Bag, Belgaum, Pin-590 002. |
| 7. | 8746 | Dr. Aatira. S. | BHMS | Resminivas, Thiruthivad (P.O.) Puthivara, Calicut, Kerala, 673 004. |
| 8. | 10463 | Dr. Ab Fazal Md. Arif | BHMS | S/o. M.A. Lateef D., H.No.14-442, Laxmi Gunj Road, Near G.P. School Shahabad, Tq-Chitapur, Dist.-Gulbarga. |
| 9. | 8288 | Dr. Abdul Aleem | BHMS | C/o. Mr. Abdul Jabbar, C-301, Green Lawn Apartment, Arey Road, Opp. St. Pius College, Goregaon (E), Mumbai - 400 063. |
| 10. | 842 | Dr. Abdul Khader | Exp'ce | No.1210, Old Post Office Road, Yelahanka, Bangalore-560064. |
| 11. | 8338 | Dr. Abdul Khader Raza Md. | BHMS | Razia Manzil, D.No.5/28 D-3, Near By-Pass, Bantumilli Road, Gudivada - 521 301, Krishna - Dist., Andhra Pradesh. |
| 12. | 4336 | Dr. Abdul Latheef | GCEH | 646, near K.S.R.T.C. Depot, Andersonpet, K.G.F-563113. |
| 13. | 9830 | Dr. Abdul Quadeer | BHMS | S/o. Abdul Sattar, H.No.6-384, Khoni-Alawa, Mominpura, Gulbarga-585 104. |
| 14. | 11162 | Dr. Abdul Razak. K. | BHMS | Mishkath (H), Near Police Station, Mallapuram-676 505, Kerala. |
| 15. | 5717 | Dr. Abdul Razzaque Barkatullah | BHMS | Sidia House, 4 Behram Baug, Jogeshwari (West), Mumbai-400102. [Maharashtra.] |
| 16. | 5807 | Dr. Abdul Rehaman Peerzade | BHMS | 735, Guibi Nagar, Bhiwandi-421302, Dist-Thane. Maharashtra. |
| 17. | 1681 | Dr. Abdul Sattar Khan. K. | Exp'ce | Sayeed Manzil, Gandhi Nagar, Pavagada, Dist-Tumkur-561202. |
| 18. | 9227 | Dr. Abdul Waheed | BHMS | Village-Konkati, Post-Turkaulia Tinari, Dist.-Siddharth Nagar (U.P.) Pin 272 189. |
| 19. | 7638 | Dr. Abdulgani Iqbal Abdulquyyum | BHMS | H.No.5-993/95, Mehboob Nagar Colony, Near Chouse Complex, Gulbarga-4. |
| 20. | 4751 | Dr. Abdulla E.M. | BHMS | Edayaka House, Post-Ukkinadka, Dist-Kasargod. |
| 21. | 825 | Dr. Abdulla. T.D | Exp'ce | Shifa Homoeo Clinic, Thadikaram, Kokinihi, Dist -Malapuram, Kerala-876309. |
| 22. | 3080 | Dr. Abdulrazak Ishak Ipperi | LCEH | Post-Doddi, Tq-Hukkeri, Dist-Belgaum. |
| 23. | 363 | Dr. Abdulsalam.M | Exp. | D.No.47, 23rd Ward, Near New Horizone School, Chruch Road, Bagepalli-561 207, Chickballapur Dist. |
| 24. | 1539 | Dr. Abdur Rawoof H.K. | Exp'ce | Azad Homoeo Clinic, Beside Nur Arts, Old Ganigara Street, Hassan-573201. |
| 25. | 228 | Dr. Abdurahman Shaheen | Exp'ce | Post-Mulia House Peruwai, Tq-Bantwal, Dist-D.K. Pin -574260. |

| | | | | |
|---|---|---|---|---|
| 26. | 4540 | Dr. Abhay Raghunath Patil | BHMS | 204, Jaihind Colony, Deppuc, Dhule-424001. |
| 27. | 5793 | Dr. Abhay Shrikanth Kestri | BHMS | A/p Bhoj, Tq-Chikodi, Dist-Belgaum-591263. |
| 28. | 10915 | Dr. Abhijit Ajit Alasandkar | BHMS | A/p-Dudhondi, Tq-Palvs, Dist.-Sangli, Pin-416 308, Maharashtra. |
| 29. | 7556 | Dr. Abhijit Paul | DHMS | 8, Gupta Layout, 6th Cross, SNT Street Ulsoor, Bangalore-8. |
| 30. | 9423 | Dr. Abhijith. A.P.C. | BHMS | "Inora Prastha" Kalawadi Village, Udboor Post, Mysore-570 008. |
| 31. | 9593 | Dr. Abhinand Patil | BHMS | A/p-Chikkadinkoppa, Tq-Khanapur, Dit.-Belgaum. |
| 32. | 10744 | Dr. Abhinandan | BHMS | C/o. Dr. H.P. Mishra, Hari Om Clinic Sant Gyoneshwar, Grih Nirman Society Park Site, Varshanagar, Vikhroli (W), Mumbai-400 079. |
| 33. | 4622 | Dr. Abhinandan Appasaheb Murabatti | BHMS | A/p-Karadga, Pin-591 246, Tq-Chikkodi, Dist.-Belgaum. |
| 34. | 8257 | Dr. Abhinandan Munnoli | BHMS | C/o. Ramu S. Munnolli, H.No.2935, R.S.No.179/1, Jayanagar, Hindalga Road, Belgaum. |
| 35. | 9339 | Dr. Abhinandan Patil | BHMS | A/p-Uyarkhurd, More Plot 23/2, Tq-Athani, Dist.-Belgaum, Pin-591 316. |
| 36. | 7587 | Dr. Abhinandini.N.G | BHMS | No.215, 5th Cross, 2nd Main, 3rd Block, H.R.B.R. Layout, Bangalore-84. |
| 37. | 9740 | Dr. Abhinaya.L.A.K | BHMS | 2/4, Jeganathan Pillai St., Puliakulam Coimbatore-641 045, Tamil Nadu. |
| 38. | 6064 | Dr. Abhiram V.K. | BHMS | Ramanilayam, Palappuram Post, Ottapalam, Palakkad Dist, Kerala. Pin-679103. |
| 39. | 11190 | Dr. Abhishek Jaysawal | BHMS | Homoeopathic Medical College Campus, Type-4, Awas, G2, One Viraj Khand, Gomtinagar, Lucknow-221010, U.P. |
| 40. | 8861 | Dr. Abhishek Kumar Rai | BHMS | S/o. Dr. Sudhakar Rai, Harra Ki Chungi, Azamgarh - Uttar Pradesh, 276 001. |
| 41. | 8079 | Dr. Abhishek Kumar Tripathi | BHMS | 55-1/154, Sector-2, Vashi Navi Mumbai, Pin-400 703. |
| 42. | 3352 | Dr. Abida Nasreen | LCEH | 101/A,St.John's Church Road, Bangalore – 560001. |
| 43. | 9881 | Dr. Abida Salam. P.V. | BHMS | "Safa" Valavannur, Kuttiady P.O., Kozhi Kode-Dist., Pin-673 508, Kerala. |
| 44. | 7237 | Dr. Abitha Upendran | BHMS | P.O. Box-32, Dist-Ernakulam, Angamally-683572, Kerala. |
| 45. | 8141 | Dr. Abujam Sharmila Chanu | BHMS | C/o. A. Ratankumar, Meetei, Moirang Lamkhai, Moirang, Bishnupur - 795 133, Manipur. |
| 46. | 5472 | Dr. Abujisharjeel Mohammed Ameen | BHMS | 36, 4th Nizampur, Patel Mohalla, Bhiwandi, Dist-Thane, Maharashtra. Pin-421302, |
| 47. | 5633 | Dr. Abutalib M Gorikhan | BHMS | Madani Mansion, Plot No.29, Azad Colony, Keshwapur, Hubli. |
| 48. | 5724 | Dr. Achala A. Kunder | BHMS | No.7, John Pereira, Bldg., Gavan Pada, Mulund-East, Bombay-81. |
| 49. | 9936 | Dr. Achana Devi | BHMS | H.No.9-230, Katgarpura Shahabazar, Near Chota Balaji Temple, Gulbarga-585 103. |
| 50. | 6109 | Dr. Acharwala Abdul Basit Suleman | BHMS | 115 A, Zakaria Masjid Street, Dongri, Mumbai-400009. |
| 51. | 11080 | Dr. Achchee Lal Yadav | BHMS | Subash Nagar, Nahur Village Road, Milk Shop, Opp. Hanuman Temple, Bhandup (West), Mumbai-78. |
| 52. | 10368 | Dr. Achu Mohan | BHMS | Mullathanathu House, J.P. Nagar-Stage-2, Thiruvalla-RSP.O.-689111, Kerala. |
| 53. | 10008 | Dr. Adav Sanjay Shivaji | BHMS | C/o. Shivaji Dattu Roav, A/p-Kowad, Tq-Chandgad, Dist.-Kolhapur, Pin-416 508. |
| 54. | 5712 | Dr. Adesh Yashwanth Gone | BHMS | At/po Indapur (Talashet), Tq-Mangaon, Dist-Raigad-402112. |
| 55. | 7993 | Dr. Adeshwar D. Gani | BHMS | A/p-Chinchali, Tq-Raibag, Dist.-Belgaum, Pin-591 217. |
| 56. | 9220 | Dr. Adhikarimayum Sapanadevi | BHMS | Brahmpur Aribam Leikai, New Thumbuthong Road, Near Water Supply Scheme, Imphal-Manipur-795 001 |
| 57. | 7876 | Dr. Adhoke Geeta | BHMS | Sector No.XI, Plot No.12, Mahantesh Nagar, Belgaum-590 016. |
| 58. | 3942 | Dr. Adhvaryu Keyur Narendra | LCEH | Matru Ashish Clinic, 39 Nepean Sea Road, Mumbai-400 036. |
| 59. | 8047 | Dr. Adi Basavaraj | BHMS | C/o. Dr. S.S. Adi, Jyoti 2558, M.M. Extn., Mahantesh Nagar, Belagum-590 016. |
| 60. | 575 | Dr. Adi Sangappa Sannabasappa | Exp'ce | No13, M.G. Bhavan, College Road, Belgaum.590001. |
| 61. | 59 | Dr. Adi. A.S. | Exp'ce | Kumbalagod, Mysore Road, Kengeri Hobli, Kumbalgod-Post, Bangalore-74 |
| 62. | 3418 | Dr. Adiga Jyothsna | LCEH | 23/32, Lakshmi Nivas, K.V. Layout, Jayanagar, Bangalore-560011. |
| 63. | 8605 | Dr. Adilakshmi Tondapit | BHMS | Sarada Homoeo Clinic, Jaggayyapet-521 175, Krishna Dist., (A.P.) |
| 64. | 8532 | Dr. Aditi Jain | BHMS | Flat No.101, Gethanjali Residency, 1st Cross, Kaggadaspura,C.V.Raman Nagar, Bangalore. |
| 65. | 8883 | Dr. Aditya Arya | BHMS | H.No.1354, CH. Charan Singh Colony, Opp. Jat Degree College, Muzzafar Nagar, U.P.251 001 |
| 66. | 6294 | Dr. Admani Bhanati Babu | BHMS | D/o B.D. Adimani, Plat No.89, I Stage, Mandir Marg, Rani Chanamma Nagar, Belgaum-590006. |
| 67. | 10288 | Dr. Adnaik Sharad Ashok | BHMS | A/p-Yavaluj, Tq-Panhala, Dist.-Kolhapur, Pin Code-416 205. |
| 68. | 2174 | Dr. Adur Krishnappa Gangappa | LCEH | C/O SHRI.S.F. DESAI, KUSSUM MANZIL, HUBLIKAR PLOTS, JADHANAKEIR, DHARWAD - 580008 |
| 69. | 6553 | Dr. Aejaz Husain | BHMS | C/o Mr. Yaqub Ali, H.No.9, Chhoti Bohrawadi Udaipur, Rajasthan-313001. |
| 70. | 9973 | Dr. Afreen Dharwad | BHMS | Plont No.53, Sector 1, Ramnagar, Belgaum-590 010. |
| 71. | 10246 | Dr. Afreen. S. | BHMS | Naveed Manzil, H.No.292/323, 3rd 'A' Cross, Vijaya Bank Colony Extn., Doddabanaswadi, Bangalore-43. |
| 72. | 10047 | Dr. Afrin Mulla | BHMS | MIG-120, KHB Colony, Sankeswar, Tq-Hukkeri, Dist.-Belgaum-591 313. |
| 73. | 8274 | Dr. Afroz Kavare | BHMS | C/o. Prof. I.H. Kavare, Al-Falah Mansion, Ist Cross, Shahu Nagar, Belgaum - 10. |

